# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : | 683 |
| ಸದಸ್ಯರ ಹೆಸರು : | ಶ್ರೀ ಪ್ರಸನ್ನ ಕುಮಾರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ: | 23-07-2019 |
| ಉತ್ತರಿಸಬೇಕಾದ ಸಚಿವರು | ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಸಾರ್ವಜನಿಕ ಆಸ್ಪತ್ರೆಗಳಲ್ಲಿ ವೈದ್ಯರ ಕೊರತೆಯಿಂದ ರೋಗಿಗಳಿಗೆ ಸಕಾಲದಲ್ಲಿ ಸರಿಯಾದ ಚಿಕಿತ್ಸೆ ಲಭ್ಯವಾಗದೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ<br>ಆದರೆ ಇರುವ ವೈದ್ಯರುಗಳಿಂದ ಹಾಗೂ ಅಗತ್ಯ ವೈದ್ಯರ ಸೇವೆ ಪಡೆದು ರೋಗಿಗಳಿಗೆ ತೊಂದರೆಯಾಗದಂತೆ ಸಕಾಲದಲ್ಲಿ ಚಿಕಿತ್ಸೆ ನೀಡಲು ಅನುಬಂಧ-2ರಲ್ಲಿರುವಂತೆ ಕ್ರಮ ವಹಿಸಲಾಗಿದೆ. |
| ಆ) | ರಾಜ್ಯದಲ್ಲಿ ಹಾಲಿ ವೈದ್ಯರ ಕೊರತೆ ಎಷ್ಟಿದೇ; (ಜಿಲ್ಲಾವಾರು ಮಾಹಿತಿ ನೀಡುವುದು) | ರಾಜ್ಯದಲ್ಲಿ ಹಾಲಿ ಖಾಲಿ ಇರುವ ವೈದ್ಯರ ಜಿಲ್ಲಾವಾರು ವಿವರಗಳನ್ನು ಅನುಬಂಧ-1ರಲ್ಲಿ ನೀಡಲಾಗಿದೆ |
| ಇ) | ವೈದ್ಯರ ಕೊರತೆ ನೀಗಿಸಲು ಸರ್ಕಾರ ಇದುವರೆಗೂ ಯಾವ ಕ್ರಮ ಕೈಗೊಂಡಿದೆ? | ವೈದ್ಯರ ಕೊರತೆಯನ್ನು ನೀಗಿಸಲು ತೆಗೆದುಕೊಂಡ ಕ್ರಮದ ವಿವರಗಳನ್ನು ಅನುಬಂಧ-2ರಲ್ಲಿ ನೀಡಲಾಗಿದೆ. |

ಆಕುಕ 256 ಹೆಚ್‌ಎಸ್‌ಹೆಚ್ 2019

(ಶಿವಾನಂದ ಎಸ್ ಪಾಟೀಲ)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು

ಅನುಬಂಧ - 2

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ನೇಮಕ ಮಾಡಲು ಹಾಗೂ ಭರ್ತಿ ಮಾಡಲು ಈ ಕೆಳಕಂಡಂತೆ ಕ್ರಮಗಳನ್ನು ಕೈಗೊಳ್ಳಲಾಗಿದೆ.

- ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಕೆಪಿಎಸ್‌ಸಿ ಮೂಲಕ ಆಯ್ಕೆಗೊಂಡು 255 ತಜ್ಞ ವೈದ್ಯರು ಸ್ಥಳ ಆಯ್ಕೆಮಾಡಿಕೊಂಡಿದ್ದು 159 ತಜ್ಞ ವೈದ್ಯರು ಕರ್ತವ್ಯಕ್ಕೆ ವರದಿ ಮಾಡಿಕೊಂಡು ಕಾರ್ಯನಿರ್ವಹಿಸುತ್ತಿದ್ದಾರೆ.
- 255 ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು, ಸ್ಥಳ ಆಯ್ಕೆಮಾಡಿಕೊಂಡಿದ್ದು 232 ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ಕರ್ತವ್ಯಕ್ಕೆ ವರದಿ ಮಾಡಿಕೊಂಡು ಕಾರ್ಯನಿರ್ವಹಿಸುತ್ತಿದ್ದಾರೆ.
- 2019 ನೇ ಸಾಲಿಗೆ ಕರ್ನಾಟಕ ಲೋಕಸೇವಾ ಆಯೋಗವು ತಜ್ಞ ವೈದ್ಯರ ಹಾಗೂ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳ ಹೆಚ್ಚುವರಿ ಪಟ್ಟಿಯನ್ನು ನೀಡಿದ್ದು 59 ತಜ್ಞ ವೈದ್ಯರ ಪಟ್ಟಿಯಲ್ಲಿ 40 ಮಂದಿ ತಜ್ಞ ವೈದ್ಯರು ಸಮಾಲೋಚನೆಯಲ್ಲಿ ಸ್ಥಳ ಆಯ್ಕೆ ಮಾಡಿಕೊಂಡು ಕಾರ್ಯನಿರ್ವಹಿಸುತ್ತಿದ್ದಾರೆ. ಹಾಗೆಯೇ 239 ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳ ಹೆಚ್ಚುವರಿ ಪಟ್ಟಿಯಲ್ಲಿ 108 ಮಂದಿ ವೈದ್ಯರು ಸ್ಥಳ ಆಯ್ಕೆ ಮಾಡಿಕೊಂಡು ಕಾರ್ಯನಿರ್ವಹಿಸುತ್ತಿರುತ್ತಾರೆ.
- ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಖಾಲಿ ಇರುವ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ಮತ್ತು ದಂತ ಆರೋಗ್ಯಾಧಿಕಾರಿಗಳ ಹುದ್ದೆಗಳನ್ನು ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿಕೊಳ್ಳಲು ಸರ್ಕಾರಿ ಆದೇಶ ಸಂಖ್ಯೆ: ಆಕುಕ 297 ಹೆಚ್‌ಎಸ್‌ಹೆಚ್ 2015, ದಿನಾಂಕ: 22-04-2016 ಮತ್ತು ಸೇರ್ಪಡೆ ದಿ:07.10.2016 ಹಾಗೂ ಆಕುಕ 359 ಹೆಚ್‌ಎಸ್‌ಹೆಚ್ 2016, ದಿನಾಂಕ:01-08-2016ರ ಆದೇಶಗಳಲ್ಲಿ ಅನುಮತಿ ನೀಡಲಾಗಿದೆ.
- ತಜ್ಞ ವೈದ್ಯರನ್ನು **"On Call Basis"** ಮೇಲೆ ತೆಗೆದುಕೊಳ್ಳಲು ಸರ್ಕಾರದ ಆದೇಶ ಸಂಖ್ಯೆ ಆಕುಕ 178 ಹೆಚ್‌ಎಸ್‌ಹೆಚ್ 2011 ದಿನಾಂಕ: 20-05-2016ರಲ್ಲಿ ಅನುಮತಿ ನೀಡಲಾಗಿದೆ.
- ಸರ್ಕಾರದ ಆದೇಶ ಸಂಖ್ಯೆ: ಆಕುಕ 554 ಹೆಚ್‌ಎಸ್‌ಹೆಚ್ 2016, ದಿನಾಂಕ: 22-11-2016 ರಲ್ಲಿ ಸೂಚಿತವಾದಂತೆ ತಜ್ಞ ವೈದ್ಯರುಗಳ ಎದುರು ಹುದ್ದೆಯಲ್ಲಿ ಎಂಬಿಬಿಎಸ್ ವೈದ್ಯರನ್ನು ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡಿಕೊಳ್ಳಲು ಆಯುಕ್ತರು, ಆರೋಗ್ಯ ಮತ್ತು ಕು.ಕ ಸೇವೆಗಳು, ಬೆಂಗಳೂರು ಸುತ್ತೋಲೆ ಸಂಖ್ಯೆ: ಜೆಆರ್‌ಓ(1ಎ)/101/2012-13, ದಿನಾಂಕ: 09-12-2016 ರಂತೆ ಆಯಾ ಜಿಲ್ಲೆಯ ಜಿಲ್ಲಾಧಿಕಾರಿಗಳು/ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳಿಗೆ ಅನುಮತಿ ನೀಡಲಾಗಿದೆ.
- ವೈದ್ಯರ ಪದವಿಯನ್ನು ಸರ್ಕಾರಿ ಕೋಟಾದಲ್ಲಿ ಪೂರ್ಣಗೊಳಿಸಿದ ವೈದ್ಯರುಗಳನ್ನು 1 ವರ್ಷ ಕಡ್ಡಾಯ ಗ್ರಾಮೀಣ ಸೇವೆಯಡಿಯಲ್ಲಿ ವೈದ್ಯರುಗಳನ್ನು ನೇಮಿಸಿಕೊಳ್ಳಲಾಗುತ್ತಿದೆ.
- ವೈದ್ಯರ ನೇಮಕಾತಿ ಸಮಾಲೋಚನೆ ನಂತರ ಹೆಚ್ಚಿನ ವೈದ್ಯರು ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೆ ಖಾಲಿ ಇರುವ ತಜ್ಞರು ಮತ್ತು ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳ ನೇರ ನೇಮಕಾತಿ ಹುದ್ದೆಗಳನ್ನು ತುರ್ತಾಗಿ ವಿಶೇಷ ನಿಯಮಗಳ ಮೂಲಕ ಭರ್ತಿ ಮಾಡುವ ಪ್ರಕ್ರಿಯೆ ಚಾಲನೆಯಲ್ಲಿರುತ್ತದೆ.

ಅನುಬಂಧ-1
ಪ್ರಶ್ನೆ ಸಂಖ್ಯೆ:683

ಖಾಲಿ ಇರುವ ಹುದ್ದೆಗಳ ಮಾಹಿತಿ

| ಕ್ರ ಸಂ | ಜಿಲ್ಲೆಯ ಹೆಸರು | ತಜ್ಞರು | ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು | ದಂತ ಆರೋಗ್ಯಾಧಿಕಾರಿಗಳು |
|---|---|---|---|---|
| 1 | ಬೆಂಗಳೂರು ನಗರ | 7 | 4 | 0 |
| 2 | ಬೆಂಗಳೂರು (ಗ್ರಾ) | 5 | 2 | 0 |
| 3 | ರಾಮನಗರ | 8 | 2 | 0 |
| 4 | ಕೋಲಾರ | 15 | 2 | 0 |
| 5 | ಚಿಕ್ಕಬಳ್ಳಾಪುರ | 27 | 5 | 0 |
| 6 | ತುಮಕೂರು | 30 | 9 | 0 |
| 7 | ಚಿತ್ರದುರ್ಗ | 49 | 3 | 4 |
| 8 | ದಾವಣಗೆರೆ | 26 | 2 | 1 |
| 9 | ಶಿವಮೊಗ್ಗ | 42 | 4 | 2 |
| 10 | ಮೈಸೂರು | 19 | 3 | 0 |
| 11 | ಮಂಡ್ಯ | 17 | 3 | 1 |
| 12 | ಚಾಮರಾಜ ನಗರ | 30 | 2 | 0 |
| 13 | ಕೊಡಗು/ ಮಡಿಕೇರಿ | 50 | 6 | 3 |
| 14 | ಹಾಸನ | 67 | 6 | 1 |
| 15 | ಚಿಕ್ಕಮಗಳೂರು | 40 | 5 | 0 |
| 16 | ಉಡುಪಿ | 20 | 4 | 0 |
| 17 | ದಕ್ಷಿಣ ಕನ್ನಡ | 36 | 6 | 1 |
| 18 | ಬೆಳಗಾವಿ | 94 | 14 | 9 |
| 19 | ಕಾರವಾರ(ಉ.ಕ) | 67 | 8 | 1 |
| 20 | ಧಾರವಾಡ | 14 | 8 | 1 |
| 21 | ಗದಗ | 34 | 6 | 2 |
| 22 | ಹಾವೇರಿ | 69 | 5 | 4 |
| 23 | ವಿಜಯಪುರ | 58 | 9 | 7 |

| | | | | |
|---|---|---|---|---|
| 24 | ಬಾಗಲಕೋಟೆ | 46 | 10 | 4 |
| 25 | ಕಲಬುರಗಿ | 121 | 6 | 1 |
| 26 | ಯಾದಗಿರಿ | 30 | 1 | 1 |
| 27 | ಬೀದರ್ | 35 | 0 | 3 |
| 28 | ರಾಯಚೂರು | 34 | 3 | 0 |
| 29 | ಬಳ್ಳಾರಿ | 78 | 5 | 5 |
| 30 | ಕೊಪ್ಪಳ | 38 | 4 | 9 |
| | ಒಟ್ಟು | **1206** | **147** | **60** |